# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 55 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಎಂ.ಎ.ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3) | ಉತ್ತರಿಸಬೇಕಾದ ದಿನಾಂಕ | 13/12/2021 |
| 4) | ಉತ್ತರಿಸುವವರು | ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು |

************

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | NATIONAL COMMISSION FOR MINORITY EDUCATIONAL INSTITUTIONS ಇವರು ರಾಜ್ಯದ ಯಾವ ಯಾವ ಕೈಗಾರಿಕಾ ತರಬೇತಿ ಸಂಸ್ಥೆ (ಐ.ಟಿ.ಐ) ಗಳಿಗೆ ಅಲ್ಪಸಂಖ್ಯಾತರ ಶಿಕ್ಷಣ ಸಂಸ್ಥೆ ಸ್ಥಾನಮಾನ ನೀಡಿದೆ; (ಕಾಲೇಜುವಾರು ಮಾಹಿತಿ ನೀಡುವುದು) | ಲಭ್ಯವಿರುವ ಮಾಹಿತಿಯಂತೆ ಈ ಕೆಳಕಂಡ ಎರಡು ಸಂಸ್ಥೆಗಳಿಗೆ ಅಲ್ಪಸಂಖ್ಯಾತರ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡಲಾಗಿದೆ.<br>1.ಗೌಸಿಯಾ ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆ, ಹೊಸೂರು ರಸ್ತೆ, ಬೆಂಗಳೂರು-29.<br>2.ಕೋಮಲಣ್ಣ ದೊಡ್ಡಣ್ಣನವರ್ ಭರತೇಶ್ ಐ.ಟಿ.ಐ, ಬಸವನ ಕುಡಚಿ, ಭರತೇಶ್ ನಗರ, ಬೆಳಗಾವಿ |
| ಆ) | ಈ ಪ್ರಕಾರ ರಾಜ್ಯ ಸರ್ಕಾರವು ಸಹ ಈ ಸಂಸ್ಥೆಗಳಿಗೆ ಅಲ್ಪಸಂಖ್ಯಾತರ ಶಿಕ್ಷಣ ಸಂಸ್ಥೆ ಸ್ಥಾನಮಾನ ನೀಡಲು ಕ್ರಮ ಕೈಗೊಂಡಿದೆ; (ಕಾಲೇಜುವಾರು ಮಾಹಿತಿ ನೀಡುವುದು) ಕೈಗೊಂಡಿದ್ದಲ್ಲಿ, ಆದೇಶಗಳ ಸಹಿತ ವಿವರ ನೀಡುವುದು; ಈ ಸಂಸ್ಥೆಗಳಿಗೆ ನಿಯಮಾನುಸಾರ ಯಾವ ಸೌಲಭ್ಯಗಳನ್ನು ಕಲ್ಪಿಸಲಾಗಿದೆ; (ವಿವರ ನೀಡುವುದು) | NATIONAL COMMISSION FOR MINORITY EDUCATIONAL INSTITUTIONS ಇದರಿಂದ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡಿರುವುದರಿಂದ ಮತ್ತೊಮ್ಮೆ ರಾಜ್ಯ ಸರ್ಕಾರದಿಂದ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡುವ ಅವಶ್ಯಕತೆ ಇರುವುದಿಲ್ಲ.<br>ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ಹೊಂದಿದ ಸಂಸ್ಥೆಗಳಿಗೆ ಅರ್ಹ ಸೌಲಭ್ಯಗಳನ್ನು ಒದಗಿಸುವ ಬಗ್ಗೆ ಅಗತ್ಯ ನಿಯಮಗಳನ್ನು ರೂಪಿಸಲಾಗುತ್ತಿದೆ. |
| ಇ) | ಅಲ್ಪಸಂಖ್ಯಾತರ ಶಿಕ್ಷಣ ಸಂಸ್ಥೆ ಸ್ಥಾನಮಾನ ಕೋರಿ ರಾಜ್ಯದ ಯಾವ ಯಾವ ಕೈಗಾರಿಕಾ ಸಂಸ್ಥೆ (ಐ.ಟಿ.ಐ) ಗಳು ಸರ್ಕಾರಕ್ಕೆ ಪ್ರಸ್ತಾವನೆಗಳನ್ನು ಸಲ್ಲಿಸಿವೆ. ಈ ಪ್ರಸ್ತಾವನೆಗಳು ಯಾವ ಹಂತದಲ್ಲಿವೆ; (ವಿವರ ನೀಡುವುದು) | ಈ ಕೆಳಕಂಡ ಕೈಗಾರಿಕಾ ತರಬೇತಿ ಸಂಸ್ಥೆಗಳು ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ಕೋರಿ ಮನವಿ ಸಲ್ಲಿಸಿವೆ.<br>1) ಭರತೇಶ್ ಕೈಗಾರಿಕಾ ತರಬೇತಿ ಸಂಸ್ಥೆ, ಸಂಕೇಶ್ವರ ರಸ್ತೆ, ಹುಕ್ಕೇರಿ, ಬೆಳಗಾವಿ<br>2) ಆದರ್ಶ ಕೈಗಾರಿಕಾ ತರಬೇತಿ ಸಂಸ್ಥೆ, ಹಾವೇರಿ<br>3) ಗ್ಲೋಬಲ್ ಕೈಗಾರಿಕಾ ತರಬೇತಿ ಸಂಸ್ಥೆ, ಬಾಗಲಕೋಟೆ<br>4) ಎಂ.ಇ.ಎಸ್ ಕೈಗಾರಿಕಾ ತರಬೇತಿ ಸಂಸ್ಥೆ, ಮೈಸೂರು.<br>5) ಕ್ರೈಸ್ಟ್ ಅಕಾಡೆಮಿ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್ ಸ್ಟಡೀಸ್ ಬೇಗೂರು.<br>6) ಜಮೆ ಉಲ್ ಉಲೂಮ್ ಕೈಗಾರಿಕಾ ತರಬೇತಿ ಸಂಸ್ಥೆ, ಬಿಡದಿ, ರಾಮನಗರ.<br>ಅಲ್ಪಸಂಖ್ಯಾತರ ಶಿಕ್ಷಣ ಸಂಸ್ಥೆಯ ಸ್ಥಾನಮಾನ ಕೋರಿ ರಾಜ್ಯ ಸರ್ಕಾರಕ್ಕೆ ಸಲ್ಲಿಸುವ ಪ್ರಸ್ತಾವನೆಗಳ ಮೇಲೆ ಹೇಗೆ ಕ್ರಮ ಕೈಗೊಳ್ಳಬೇಕು ಎಂಬುದರ ಬಗ್ಗೆ ಹೊಸದಾಗಿ ನಿಯಮಾವಳಿಗಳನ್ನು ರೂಪಿಸಲಾಗುತ್ತಿದೆ. ನಿಯಮಾವಳಿಗಳು ಅಂತಿಮಗೊಂಡ ನಂತರ, ಸದರಿ ನಿಯಮಗಳ ಪ್ರಕಾರ ಪ್ರಸ್ತಾವನೆಗಳನ್ನು ಪರಿಶೀಲಿಸಲಾಗುವುದು. |

--2

| | | |
|---|---|---|
| ಈ) | NATIONAL COMMISSION FOR MINORITY EDUCATIONAL INSTITUTIONS ರವರು ರಾಜ್ಯದ ಕೆಲವು ಕೈಗಾರಿಕಾ ತರಬೇತಿ ಸಂಸ್ಥೆ (ಐ.ಟಿ.ಐ) ಗಳಿಗೆ ಅಲ್ಪಸಂಖ್ಯಾತರ ಶಿಕ್ಷಣ ಸಂಸ್ಥೆ ಸ್ಥಾನಮಾನ ನೀಡಿದ್ದರೂ ಅದನ್ನು ರಾಜ್ಯ ಸರ್ಕಾರವು ಮಾನ್ಯತೆ ಮಾಡದೇ ಇದ್ದಲ್ಲಿ ಇದು ಸಂವಿಧಾನದ ಅನುಚ್ಛೇದ 30 ರ ಉಲ್ಲಂಘನೆಯಾಗುವುದಿಲ್ಲವೇ; ಇಂತಹ ಪ್ರಕರಣಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿ ಇದೆಯೇ? (ವಿವರ ನೀಡುವುದು) | NATIONAL COMMISSION FOR MINORITY EDUCATIONAL INSTITUTIONS ರವರು ರಾಜ್ಯದ ಗೌಸಿಯಾ ಕೈಗಾರಿಕಾ ತರಬೇತಿ ಸಂಸ್ಥೆ, ಬೆಂಗಳೂರು ಹಾಗೂ ಕೋಮಲ್ಲಣ್ಣ ದೊಡ್ಡಣ್ಣನವರ ಭರತೇಶ ಕೈಗಾರಿಕಾ ತರಬೇತಿ ಸಂಸ್ಥೆ, ಬಸವನಕುಡಚಿ, ಬೆಳಗಾವಿ ಈ ಸಂಸ್ಥೆಗಳಿಗೆ ಅಲ್ಪಸಂಖ್ಯಾತರ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡಲಾಗಿರುತ್ತದೆ.<br><br>ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ಹೊಂದಿದ ಸಂಸ್ಥೆಗಳಿಗೆ ಅರ್ಹ ಸೌಲಭ್ಯಗಳನ್ನು ವಿಸ್ತರಿಸುವ ಬಗ್ಗೆ ಅಗತ್ಯ ನಿಯಮಗಳನ್ನು ರೂಪಿಸಲಾಗುತ್ತಿದೆ. |

**ಸಂಖ್ಯೆ: ಕೌಉಜೀಇ 80 ಕೈತಪ್ರ 2021**

(ಡಾ.ಸಿ.ಎನ್.ಅಶ್ವತ್ಥ ನಾರಾಯಣ)
ಉನ್ನತ ಶಿಕ್ಷಣ, ಐಟಿ-ಬಿಟಿ, ವಿಜ್ಞಾನ ಮತ್ತು
ತಂತ್ರಜ್ಞಾನ, ವಿದ್ಯುನ್ಮಾನ ಮತ್ತು
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು